# ಒಂದು ಸಣ್ಣ ಚುಕ್ಕೆ



ಪೀಟರ್ ರೇನಾಲ್ಡ್ಸ




# ಒಂದು ಸಣ್ಣ ಚುಕ್ಕೆ

## ಪೀಟರ್ ರೋನಾಲ್ಡ್ಸ

### ಕನ್ನಡಕ್ಕೆ ಪ್ರಭಾಕರ ನಾನಾವಟಿ

ಚಿತ್ರಕಲೆಯ ಅವಧಿ ಮುಗಿದಿತ್ತು.
ಆದರೆ ವಾಶ್ತಿ ಇನ್ನೂ ಕುರ್ಚಿಯ
ಮೇಲೆ ಕುಳಿತೇ ಇದ್ದಳು. ಅವಳ
ಎದುರಿಗೆ
ಏನೂ ಬರೆಯದ ಖಾಲಿ ಕಾಗದ.

ವಾಶ್ತಿಯ ಟೀಚರಮ್ಮ ಬಗ್ಗಿ ನೋಡಿದಳು.
ಬರಿ ಬಿಳಿ ಕಾಗದ!
“ಓಹ್! ಉತ್ತರ ಧ್ರುವದ ಬಿರುಗಾಳಿಯಲ್ಲಿ
ಹಿಮಗರಡಿ ಸಿಕ್ಕಿ ಬಿದ್ದ ಹಾಗೆ ಕಾಣುತ್ತದೆ!”
ಆಚ್ಚರಿಯಾಗಿ ನುಡಿದಳು.

“ಅಚ್ಚರಿಯೇ? ಸರಿ! ನನಗೆ ಚಿತ್ರ ತೆಗೆಯಲು
ಬರುವದಿಲ್ಲ.”
ವಾಶ್ತಿ ಹೇಳತೊಡಗಿದಳು.



ವಾಶ್ತಿ ತನ್ನ ಮಾರ್ಕರ್ ಪೆನ್ನನ್ನು ಹೊರತೆಗೆದು
ಕಾಗದದ ಮೇಲೆ ಜೋರಾಗಿ ಅಪ್ಪಳಿಸಿದಳು.
“ಇದು ನೋಡಿ.”



ಟೀಚರಮ್ಮ ಕಾಗದವನ್ನು ದಿಟ್ಟಿಸಿ ನೋಡಿದಳು.

"ಹುಂ... ಇದರ ಮೇಲೆ ನಿನ್ನ ಸಹಿ ಮಾಡು.."

ಅವಳು ಹೇಳಿದಳು.



ಸಹಿಗಾಗಿ ಕಾಗದವನ್ನು
ವಾಶ್ತಿಯ ಮುಂದಿಟ್ಟಳು.

ವಾಶ್ತಿ ಒಂದು ಕ್ಷಣ ವಿಚಾರ ಮಾಡಿದಳು.

“ನನಗೆ ಚಿತ್ರ ತೆಗೆಯಲು ಬರಲಿಕ್ಕಿಲ್ಲ. ಆದರೆ ನಾನು ನನ್ನ ಸಹಿ ಮಾಡಬಲ್ಲೆ.”

ವಾಶ್ತಿ ಮರುವಾರದ   ಚಿತ್ರಕಲೆಯ ಕ್ಲಾಸಿಗೆ ಹೋದಾಗ ಟೀಚರಮ್ಮನ ಕುರ್ಚಿಯ ಹಿಂದೆ ತೂಗುಹಾಕಿದ ಚಿತ್ರ ನೋಡಿದಾಗ ಅವಳಿಗೆ ಬಹಳ ಆಶ್ಚರ್ಯವಾಯಿತು.

ಏಕೆಂದರೆ

ಅಲ್ಲಿ ಅವಳು ಚಿತ್ರಿಸಿದ ಆ ಚುಕ್ಕೆಯ - ಅವಳ  ಸಣ್ಣ ಚುಕ್ಕೆಯ ಚಿತ್ರ.

ಅಷ್ಟೇ ಅಲ್ಲ, ಅದು ಕೂಡ ಬಂಗಾರ ಬಣ್ಣದ ಚೌಕಟ್ಟಿನಲ್ಲಿ!



“ಹುಂ..... ನಾನು ಇದಕ್ಕಿಂತ ಚಂದವಾದ
ಚುಕ್ಕೆ ತೆಗೆಯಬಲ್ಲೆ.”



ವಾಶ್ತಿ ಇನ್ನೂವರೆಗೂ ಕೈಹಚ್ಚದ ತನ್ನ ಬಣ್ಣದ ಪೆಟ್ಟಿಗೆಯನ್ನು ತೆರೆದಳು. ಮತ್ತು ಕೆಲಸಕ್ಕೆ ತೊಡಗಿದಳು.



ವಾಶ್ತಿ ಒಂದಾದ ಮೇಲೆ ಒಂದರಂತೆ
ಚುಕ್ಕೆಗಳನ್ನು ಚಿತ್ರಿಸತೊಡಗಿದಳು.
ಒಂದು ಹಳದಿ ಬಣ್ಣದ ಚುಕ್ಕೆ.
ಒಂದು ಹಸಿರು ಚುಕ್ಕೆ.
ಒಂದು ಕೆಂಪು ಚುಕ್ಕೆ.
ಇನ್ನೊಂದು ನೀಲಿ ಚುಕ್ಕೆ.



ನೀಲಿ ಬಣ್ಣವನ್ನು ಕೆಂಪು ಬಣ್ಣದಲ್ಲಿ
ಕೂಡಿಸಿದಾಗ ನೇರಳೆ ಬಣ್ಣವಾದದ್ದು
ಅವಳಿಗೆ ತಿಳಿಯಿತು.
ವಾಶ್ತಿ ಬೇರೆ ಬೇರೆ
ಬಣ್ಣಗಳನ್ನುಪಯೋಗಿಸಿ ಚುಕ್ಕೆಗಳನ್ನು
ತೆಗೆಯತೊಡಗಿದಳು.



“ನಾನು ಚಿಕ್ಕ ಚುಕ್ಕೆಗಳನ್ನು ತೆಗೆಯುವಂತೆ
ದೊಡ್ಡ ಚುಕ್ಕೆಗಳನ್ನು ಕೂಡ ಚಿತ್ರಿಸಬಲ್ಲೆ.”
ವಾಶ್ತಿ ಒಂದು ದೊಡ್ಡ ಬ್ರಶ್ ನ್ನು ಹಿಡಿದು
ದೊಡ್ಡ ಕಾಗದದ ಮೇಲೆ ದೊಡ್ಡ, ದೊಡ್ಡ
ಚುಕ್ಕೆಗಳನ್ನು ಚಿತ್ರಿಸಿದಳು.

ವಾಶ್ತಿ ಒಂದು ಅತೀ ದೊಡ್ಡದಾದ ಚುಕ್ಕೆಯನ್ನು ಚಿತ್ರಿಸಿದಳು. ಆದರೆ ಅದಕ್ಕೆ ಯಾವದೇ ಬಣ್ಣವನ್ನು ಕೊಡಲಿಲ್ಲ.





ಕೆಲ ವಾರಗಳಾದ ಮೇಲೆ ಶಾಲೆಯಲ್ಲಿ ಚಿತ್ರಗಳ ಪ್ರದರ್ಶನವನ್ನು ಏರ್ಪಡಿಸಲಾಗಿತ್ತು. ವಾಶ್ತಿಯ ಚಿತ್ರವನ್ನು ಎಲ್ಲರೂ ಮೆಚ್ಚಿದರು.

ಅವಳ ಚಿತ್ರವನ್ನು ದಿಟ್ಟಿಸಿ ನೋಡುತ್ತಿದ್ದ ಅವಳಿಗಿಂತ ಚಿಕ್ಕವನಿದ್ದ ಒಬ್ಬ ಹುಡುಗನೆಡೆ ವಾತ್ಸ್ರಿಯ ಗಮನ ಸೆಳೆಯಿತು. “ನೀವು ಬಹು ದೊಡ್ಡ ಕಲಾವಿದರು!” ಎಂದು ಆತ ಅವಳನ್ನು ಹೊಗಳಿದನು.

“ನನಗೂ ಕೂಡ ಚಿತ್ರಕಲೆ ಬರುತ್ತಿದ್ದರೆ...” ಎಂದು ನೊಂದ ದನಿಯಲ್ಲಿ ಆತ ನುಡಿದನು.

“ನಿನಗೂ ನಿಶ್ಚಿತವಾಗಿ ಬರುತ್ತದೆ. “

“ನನಗೆ...! ನನಗಂತೂ ಇಂಚುಪಟ್ಟಿ ಹಿಡಿದು ಸರಳವಾದ ಗೆರೆ ಕೂಡ ತೆಗೆಯಲು ಬರುವದಿಲ್ಲ. “ ಹುಡುಗ ಹೇಳಿದನು.

ವಾಶ್ತಿ ನಕ್ಕಳು.
ಹುಡುಗನ ಕೈಯಲ್ಲಿ ಒಂದು ಕಾಗದ
ಕೊಡುತ್ತ
"ನೋಡುವ...." ಎಂದು ಹೇಳಿದಳು.

ಗೆರೆ ತೆಗೆಯುವಾಗ ಹುಡುಗನ
ಕೈಯಲ್ಲಿಯ ಪೆನ್ಸಿಲ್ ನಡುಗುತ್ತಿತ್ತು.

ಹುಡುಗನ ಅಡ್ಡ-ತಿಡ್ಡ ಗೆರೆಗಳನ್ನು ವಾಶ್ತಿ ದಿಟ್ಟಿಸಿ ನೋಡಿದಳು.

ಅವಳು ಹೇಳತೊಡಗಿದಳು...

**“ಇದರ ಮೇಲೆ ನಿನ್ನ ಸಹಿ ಮಾಡು....”**

**ಸಮಾಪ್ತಿ**

